ಕರ್ನಾಟಕ ವಿಧಾನ ಪರಿಷತ್ತು
143 ನೇ ಅಧಿವೇಶನ 2021

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 2068
ಮಾನ್ಯ ಸದಸ್ಯರ ಹೆಸರು : ಶ್ರೀ. ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸುವ ದಿನಾಂಕ : 24-03-2021
ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಲೋಕೋಪಯೋಗಿ ಸಚಿವರು

| ಕ್ರಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ರಾಜ್ಯ ಹೆದ್ದಾರಿಗಳಲ್ಲಿ ಕಡ್ಡಾಯ ಫಾಸ್ಟ್ ಟ್ಯಾಗ್ ಮತ್ತು ಅವೈಜ್ಞಾನಿಕ ಟೋಲ್ ಶುಲ್ಕದಿಂದ ಸಾರ್ವಜನಿಕರು ಟೋಲ್‌ಗಳಲ್ಲಿ ದಿನನಿತ್ಯ ಕಿರಿಕಿರಿ / ಗಲಾಟೆಗಳಿಂದ ಬೇಸತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ ವತಿಯಿಂದ ರಾಜ್ಯ ಹೆದ್ದಾರಿಗಳಲ್ಲಿ ಮಾತ್ರ ಟೋಲ್ ಸಂಗ್ರಹಣೆ ನಿರ್ವಹಿಸುತ್ತಿದ್ದು, ಇವುಗಳಿಗೆ ಫಾಸ್ಟ್ ಟ್ಯಾಗ್ ಅಳವಡಿಸಲು ನಿಗಮ ವತಿಯಿಂದ ಟೋಲ್ ಗುತ್ತಿಗೆದಾರರಿಗೆ ಇತ್ತೀಚೆಗೆ ನಿರ್ದೇಶನ ನೀಡಿದ್ದು, ಫಾಸ್ಟ್ ಟ್ಯಾಗ್ ಅಳವಡಿಕೆ ಪ್ರಕ್ರಿಯೆ ಪ್ರಗತಿಯಲ್ಲಿರುತ್ತದೆ.<br><br>ಸರ್ಕಾರದ ಅಧಿಸೂಚನೆ ಸಂಖ್ಯೆ: ಲೋಇ: 06 ಇಎಪಿ 2012(ಪಿ3), ದಿನಾಂಕ: 07-03-2015 ರಲ್ಲಿ ಮಾರ್ಗಸೂಚಿಯಂತೆ ಟೋಲ್ ಶುಲ್ಕ ವಿಧಿಸಲಾಗುತ್ತಿದ್ದು, ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ ವತಿಯಿಂದ ನಿರ್ವಹಿಸುತ್ತಿರುವ ಟೋಲ್ ಪ್ಲಾಜಾಗಳಲ್ಲಿ ವಿವಿಧ ಮಾದರಿಯ ವಾಹನಗಳಿಗೆ ನಿಗಧಿಪಡಿಸಿರುವ ಟೋಲ್ ಶುಲ್ಕ ಅವೈಜ್ಞಾನಿಕವಾಗಿರುವುದಿಲ್ಲ. |
| ಆ) | ಹಾಗಿದ್ದಲ್ಲಿ, ಸಾರ್ವಜನಿಕರಿಗೆ ಟೋಲ್‌ಗಳಲ್ಲಿ ಅನಗತ್ಯ ಕಿರಿಕಿರಿ/ ಗಲಾಟೆ ತಪ್ಪಿಸುವ ನಿಟ್ಟಿನಲ್ಲಿ ಸರ್ಕಾರ ತೆಗೆದುಕೊಂಡ ಕ್ರಮಗಳೇನು; (ವಿವರ ನೀಡುವುದು) | ಟೋಲ್ ಪ್ಲಾಜಾಗಳಲ್ಲಿ ಸಾರ್ವಜನಿಕರಿಗೆ ಅನುಕೂಲವಾಗುವಂತೆ ಈ ಕೆಳಕಂಡ ಮಾಹಿತಿಗಳು ಲಭ್ಯವಿರುತ್ತದೆ.<br>1) ಟೋಲ್ ಗುತ್ತಿಗೆದಾರರು ಟೋಲ್ ಪ್ಲಾಜಾಗಳಲ್ಲಿ ಮಾಹಿತಿಗಳನ್ನು ಒದಗಿಸಲು sign boards, display boards ಗಳನ್ನು ಅಳವಡಿಸಲಾಗಿದೆ.<br>2) ಎಲ್ಲಾ ಟೋಲ್ ಪ್ಲಾಜಾಗಳಲ್ಲಿ ಟೋಲ್ ಗೇಟ್‌ಗಳು ಹಾಗೂ ನಿಯಂತ್ರಣಾ ವ್ಯವಸ್ಥೆಗಳನ್ನು ನಿರ್ವಹಿಸಲಾಗಿರುತ್ತದೆ.<br>3) ಟೋಲ್ ಪ್ಲಾಜಾದಿಂದ 20 ಕಿಮೀ ಅಂತರದೊಳಗೆ ವಾಸಿಸುವ ಖಾಸಗಿ ವಾಹನಗಳಿಗೆ Local Pass (Non Commercial Vehicles) ಅನ್ನು ಪಡೆಯುವುದರ ಮೂಲಕ ರಿಯಾಯಿತಿಯನ್ನು ರಸ್ತೆ ಬಳಕೆದಾರರು ಪಡೆಯಬಹುದಾಗಿದೆ.<br>4) ಅಧಿಸೂಚನೆಯನ್ವಯ ವಿವಿಧ ಮಾದರಿಯ ವಾಹನಗಳಿಗೆ ನಿಗಧಿಪಡಿಸಿರುವ ದರಗಳು ಟೋಲ್ ಪ್ಲಾಜಾಗಳಲ್ಲಿ ಸಾರ್ವಜನಿಕರ ಮಾಹಿತಿಗಾಗಿ ಲಭ್ಯವಿರುತ್ತದೆ. |

| | | |
|---|---|---|
| ಇ) | ಎಲ್ಲಾ ವಾಹನಗಳಿಗೂ ಫಾಸ್ಟ್ ಟ್ಯಾಗ್ ಕಡ್ಡಾಯಗೊಳಿಸಿ ಸುತ್ತೋಲೆ ಹೊರಡಿಸಿರುವುದು ಸರಿಯೇ; ಸದರಿ ಆದೇಶವನ್ನು ಮತ್ತೊಮ್ಮೆ ಪರಿಶೀಲಿಸಿ ಸರಿಪಡಿಸಲಾಗುವುದೇ; (ವಿವರ ಒದಗಿಸುವುದು) | **ಸರ್ಕಾರದ ಅಧಿಸೂಚನೆ ಸಂಖ್ಯೆ: ಪಿಡಬ್ಲ್ಯೂಡಿ/06/ಇಎಪಿ/2012 (ಪಿ3) ದಿನಾಂಕ:07-03-2015** ರ ಪ್ರಕಾರ ರಾಜ್ಯ ಹೆದ್ದಾರಿಗಳಲ್ಲಿ ಫಾಸ್ಟ್‌ಟ್ಯಾಗ್ ಅಳವಡಿಸಲು ಸೂಚಿಸಿರುಸುವುದಿಲ್ಲ. ಆದಾಗ್ಯೂ ಕೇಂದ್ರ ಸರ್ಕಾರದ ಎನ್.ಎಚ್.ಎ.ಐ ವತಿಯಿಂದ ಹೊರಡಿಸಲಾದ ಅಧಿಸೂಚನೆ/ಆದೇಶದನ್ವಯ ರಾಜ್ಯ ಹೆದ್ದಾರಿಗಳಲ್ಲಿಯೂ ಫಾಸ್ಟ್ ಟ್ಯಾಗ್ ಅಳವಡಿಸುವ ಪ್ರಕ್ರಿಯೆಯನ್ನು ಹಂತ ಹಂತವಾಗಿ ಕೈಗೊಳ್ಳಲಾಗುತ್ತಿದೆ. Cashless transaction ಮತ್ತು Digitalisation ಅಂಗವಾಗಿ ರಾಜ್ಯ ಹೆದ್ದಾರಿಗಳಿಗೆ ಫಾಸ್ಟ್ ಟ್ಯಾಗ್ ಕಡ್ಡಾಯಗೊಳಿಸಲು ಕ್ರಮ ವಹಿಸಲಾಗುತ್ತಿದೆ. |
| ಈ) | ಫಾಸ್ಟ್ ಟ್ಯಾಗ್ ಹೊಂದಿಲ್ಲದ ವಾಹನಗಳಿಗೆ ದುಪ್ಪಟ್ಟು ಶುಲ್ಕ ವಿಧಿಸುತ್ತಿರುವುದು ಅವೈಜ್ಞಾನಿಕವೆಂದು ಸಾರ್ವಜನಿಕರು ಆಕ್ರೋಶ ಹೊರಹಾಕುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ರಾಜ್ಯ ಹೆದ್ದಾರಿಗಳಲ್ಲಿನ ಶುಲ್ಕ ಸಂಗ್ರಹಣೆ ಕೇಂದ್ರಗಳಲ್ಲಿ ಫಾಸ್ಟ್ ಟ್ಯಾಗ್ ಹೊಂದಿಲ್ಲದ ವಾಹನಗಳಿಗೆ ದುಪ್ಪಟ್ಟು ಶುಲ್ಕ ವಿಧಿಸಿರುವ ಬಗ್ಗೆ ಯಾವುದೇ ವರದಿ ಬಂದಿರುವುದಿಲ್ಲ. |
| ಉ) | ಸಾರ್ವಜನಿಕರಿಗೆ ಟೋಲ್‌ಗಳಲ್ಲಿ ಮತ್ತು ಟೋಲ್ ಸಿಬ್ಬಂದಿಯಿಂದ ಕಿರಿಕಿರಿ ತಪ್ಪಿಸಿ ಅನುಕೂಲ ಮಾಡಿಕೊಡುವ ಮತ್ತು ಟೋಲ್ ಸಂಚಾರ ವ್ಯವಸ್ಥೆ ಸರಾಗವಾಗಿ ಚಲಿಸುವಂತೆ ಮಾಡಲು ಸರ್ಕಾರ ತೆಗೆದುಕೊಂಡ ಮತ್ತು ತೆಗೆದುಕೊಳ್ಳುವ ಕ್ರಮಗಳೇನು? (ವಿವರ ನೀಡುವುದು) | ಟೋಲ್ ಸಂಚಾರ ವ್ಯವಸ್ಥೆ ಸರಾಗವಾಗಿ ಚಲಿಸುವಂತೆ ಈ ಕೆಳಕಂಡ ಮುಂಜಾಗ್ರತಾ ಕ್ರಮ ವಹಿಸಲು ಸೂಚಿಸಲಾಗಿರುತ್ತದೆ :<br>1)ಟೋಲ್ ಪ್ಲಾಜಾಗಳಲ್ಲಿ 5 ವಾಹನಗಳಿಗಿಂತ ಹೆಚ್ಚು ವಾಹನಗಳ ಸರತಿ (Queue) ಇರದಂತೆ ನಿಯಂತ್ರಣಾ ವ್ಯವಸ್ಥೆಗಳನ್ನು ನಿರ್ವಹಿಸಲಾಗುತ್ತಿದೆ.<br>2) ಟೋಲ್ ಪ್ಲಾಜಾಗಳಿಗೆ ಚಲಿಸುವ ವಾಹನಗಳು ಸುಗಮವಾಗಿ ಸಂಚರಿಸಲು ಎಲ್ಲಾ ಪಥಗಳನ್ನು ಎಲ್ಲಾ ಸಮಯದಲ್ಲಿ ತೆರೆದಿರಬೇಕಾಗಿದ್ದು, ಪ್ರತಿ ವಾಹನಕ್ಕೆ ಕನಿಷ್ಠ 30 ಸೆಕೆಂಡ್ ಗಳ ಒಳಗೆ ಟೋಲ್ ಪಾವತಿಸಿ ಮುಂದೆ ತೆರಳಲು ಅವಕಾಶ ಮಾಡಬೇಕಾಗಿರುತ್ತದೆ. |

ಸಂಖ್ಯೆ:ಲೋಇ ಇ-118 ಇಎಪಿ 2021

**(ಗೋವಿಂದ ಎಂ. ಕಾರಜೋಳ)**
ಮಾನ್ಯ ಉಪ ಮುಖ್ಯಮಂತ್ರಿಗಳು,
ಲೋಕೋಪಯೋಗಿ ಸಚಿವರು